# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 143 (78)
2. ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸುವ ದಿನಾಂಕ : 03.03.2020
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ 10 ವರ್ಷಗಳಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ರಾಜ್ಯದಲ್ಲಿ ಕೈಗಾರಿಕಾ ಅಭಿವೃದ್ಧಿಗಾಗಿ ವಶಪಡಿಸಿಕೊಳ್ಳಲಾದ ಜಮೀನಿನ ವಿಸ್ತೀರ್ಣವೆಷ್ಟು; | ಕಳೆದ 10 ವರ್ಷಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳ ವತಿಯಿಂದ ಕೈಗಾರಿಕಾ ಪ್ರದೇಶ ಮತ್ತು ಏಕಘಟಕ ಸಂಕೀರ್ಣಗಳಗಾಗಿ ಒಟ್ಟು 61687-17 ಎಕರೆ ಜಮೀನನ್ನು ಸ್ವಾಧೀನಪಡಿಕೊಳ್ಳಲಾಗಿದೆ. |
| ಆ. | ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಕೈಗಾರಿಕೋದ್ಯಮಿಗಳಿಗೆ ನೀಡಲಾಗಿರುವ ರಿಯಾಯಿತಿಗಳಾವುವು; (ಸಂಪೂರ್ಣ ಮಾಹಿತಿ ನೀಡುವುದು) | ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಕೈಗಾರಿಕೋದ್ಯಮಿಗಳಿಗೆ ಈ ಕೆಳಗಿನ ಪ್ರೋತ್ಸಾಹಕ ಮತ್ತು ರಿಯಾಯಿತಿಗಳನ್ನು ನೀಡಲಾಗುತ್ತಿದೆ:<br>1. ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಟ ಸಾಲ ರೂ.25.00 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇಕಡಾ 15ರಿಂದ ಶೇಕಡಾ 35ರವರೆಗೆ ಗರಿಷ್ಟ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ;<br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4ರ ಬಡ್ಡಿ ದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ;<br>3. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 10ರಂತೆ ಬಡ್ಡಿ ಸಹಾಯಧನ ನೀಡಲಾಗುವುದು;<br>4. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇಕಡಾ 50 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಟ 2 ಎಕರೆ) ಮತ್ತು ಶೇಕಡಾ 90 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ;<br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇಕಡಾ |

| | | |
|---|---|---|
| | | 60 ರಷ್ಟು ಗರಿಷ್ಠ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ;<br>6. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಮೊದಲ ಪೀಳಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಠ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ **The Debt Equity Ratio** 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇಕಡಾ 50ರಷ್ಟು ಬಡ್ಡಿ ರಹಿತ ಗರಿಷ್ಠ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ;<br>7. ದಿನಾಂಕ: 01.04.2017ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆ.ಎಸ್.ಎಫ್.ಸಿ. ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸಿರುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸಲಾಗುತ್ತಿದೆ;<br>8. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಗಳು ದಿನಾಂಕ: 01.04.2017ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಷಗಳ ಅವಧಿಗೆ ಪ್ರತಿ ಯುನಿಟ್‌ಗೆ ರೂ.2.00 ರಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ;<br>9. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2014-19ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ:<br>1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ;<br>2. ಬಂಡವಾಳ ಹೂಡಿಕೆ ಸಹಾಯಧನ;<br>3. ಬಡ್ಡಿ ಸಹಾಯಧನ;<br>4. ಭೂ ಪರಿವರ್ತನಾ ಶುಲ್ಕ ಮರುಪಾವತಿ;<br>5. ಪ್ರವೇಶ ತೆರಿಗೆ ವಿನಾಯಿತಿ;<br>6. ರಫ್ತು ಆದಾರಿತ ಘಟಕಗಳಿಗೆ ರಿಯಾಯಿತಿ;<br>7. ತ್ಯಾಜ್ಯ ಸಂಸ್ಕರಣಾ ಯಂತ್ರ ಸ್ಥಾಪನೆಗೆ ಸಹಾಯಧನ;<br>8. ವಿದ್ಯುತ್ ತೆರಿಗೆ ವಿನಾಯಿತಿ; ಇತ್ಯಾದಿ. |
| ಇ. | ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಈಗಾಗಲೇ ವಿತರಿಸಲಾಗಿರುವ ಕೈಗಾರಿಕಾ ಶೆಡ್ಡುಗಳ ಸಂಖ್ಯೆ ಎಷ್ಟು; ಈ ಶೆಡ್ಡುಗಳನ್ನು ಯಾವ ಮಾನದಂಡದ ಮೇಲೆ ವಿತರಿಸಲಾಗಿರುತ್ತದೆ; | ರಾಜ್ಯದಲ್ಲಿನ ಸಣ್ಣ ಪ್ರಮಾಣದ ಕೈಗಾರಿಕೆಗಳ ಅಭಿವೃದ್ಧಿ ಸಲುವಾಗಿ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತವು ರಾಜ್ಯದ ವಿವಿಧ ಸ್ಥಳಗಳಲ್ಲಿ ಅವಶ್ಯ ಮೂಲಭೂತ ಸೌಕರ್ಯಗಳನ್ನು ಒಳಗೊಂಡ ಒಟ್ಟು 188 ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಲಾಗಿದೆ.<br>ಅವುಗಳಲ್ಲಿ ವಿವಿಧ ಮಾದರಿಯ 5828 ಕೈಗಾರಿಕಾ ಮಳಿಗೆಗಳನ್ನು ನಿರ್ಮಿಸಿದ್ದು, ಒಟ್ಟು 5630 ಕೈಗಾರಿಕಾ ಮಳಿಗೆಗಳನ್ನು ಅರ್ಹ ಆಸಕ್ತ ಉದಯೋನ್ಮುಖ ಸಣ್ಣ ಉದ್ದಿಮೆದಾರರುಗಳಿಗೆ ಹಂಚಿಕೆ ಮಾಡಲಾಗಿದೆ.<br>ಮುಂದುವರೆದು, ಕೈಗಾರಿಕಾ ಮಳಿಗೆಗಳನ್ನು ಹಂಚಿಕೆ ಮಾಡಲು ನಿಗಮವು ಮಾನದಂಡಗಳನ್ನು ರೂಪಿಸಿದ್ದು, ಅದರಂತೆ ಹಂಚಿಕೆಗಳನ್ನು ಮಾಡಲಾಗುತ್ತಿದೆ. |

ನಿಗಮದಿಂದ ಸ್ಥಾಪಿಸಲ್ಪಟ್ಟಿರುವ ವಿವಿಧ ಕೈಗಾರಿಕಾ ವಸಾಹತುಗಳಲ್ಲಿ ಆಸಕ್ತ ಭಾವೀ ಉದ್ದಿಮೆದಾರರು ತಮ್ಮ ಸಣ್ಣ ಕೈಗಾರಿಕೆಯನ್ನು ಸ್ಥಾಪನೆ ಸಲುವಾಗಿ ಮಳಿಗೆ/ ಫ್ಲ್ಯಾಟ್ಸ್/ ಅಂಗಡಿ/ ಗೋದಾಮು ಮತ್ತು ನಿವೇಶನಗಳ ಹಂಚಿಕೆ ಪಡೆಯಲು ನಿಗಮವು ಈ ಕೆಳಕಂಡ ಮಾನದಂಡ ಮತ್ತು ವಿಧಿ-ವಿಧಾನಗಳನ್ನು ಅನುಸರಿಸುತ್ತಿದೆ.

1. ನಿಗಮವು ಸ್ಥಾಪಿಸಿರುವ ಕೈಗಾರಿಕಾ ವಸಾಹತುಗಳಲ್ಲಿನ ಖಾಲಿ ನಿವೇಶನ/ ಮಳಿಗೆಗಳ ಹಂಚಿಕೆ ಸಂಬಂಧ ಹಂಚಿಕೆ ಪತ್ರಿಕಾ ಪ್ರಕಟಣೆ ನೀಡಿ ಆಸಕ್ತ ಸಣ್ಣ ಕೈಗಾರಿಕೋದ್ಯಮಿಗಳಿಂದ ಅರ್ಜಿಗಳನ್ನು ಆಹ್ವಾನಿಸುತ್ತದೆ.
2. ಪ್ರಕಟಣೆಯ ಸಮಗ್ರ ವಿವರಗಳನ್ನು ನಿಗಮದ ವೆಬ್‌ಸೈಟ್‌ನಲ್ಲಿಯೂ ಸಹ ಅಳವಡಿಸಲಾಗುವುದು.
3. ಆಸಕ್ತ ಸಣ್ಣ ಕೈಗಾರಿಕೋದ್ಯಮಿಗಳು ನಿಗದಿತ ಅರ್ಜಿ ನಮೂನೆಯನ್ನು ವೆಬ್‌ಸೈಟ್ ಮೂಲಕವಾಗಲೀ ಅಥವಾ ನಿಗಮದ ಸಂಬಂಧಪಟ್ಟ ಕಛೇರಿಗಳಿಂದ ಪಡೆದು ನಿಗದಿತ ಅರ್ಜಿ ಶುಲ್ಕ, ಪರಿಶೀಲನಾ ಶುಲ್ಕ ಹಾಗೂ ಮಳಿಗೆ/ ನಿವೇಶನಗಳ ಮೌಲ್ಯದ ಮೇಲೆ ನಿಗಧಿಪಡಿಸಲಾದ ಮುಂಗಡ ಠೇವಣಿ ಹಣದೊಂದಿಗೆ ಮತ್ತು ಅವಶ್ಯ ಪೂರಕ ದಾಖಲಾತಿಗಳೊಂದಿಗೆ ಸಲ್ಲಿಸಬೇಕಿರುತ್ತದೆ.
4. ಸ್ವೀಕೃತಗೊಂಡ ಅರ್ಜಿಗಳನ್ನು ರಾಜ್ಯ ಮಟ್ಟದ ಮಳಿಗೆ ಹಂಚಿಕೆ ಸಮಿತಿ / ಜಿಲ್ಲಾಮಟ್ಟದ ಏಕಗವಾಕ್ಷಿ ಪರಾಮರ್ಶಿತ ಸಮಿತಿಯ ನಿಯಮಾನುಸಾರ ಪರಿಶೀಲಿಸಿ, ಸಲ್ಲಿಸಿರುವ ಅವಶ್ಯ ಪೂರಕ ದಾಖಲೆಗಳ ಆಧಾರದ ಮೇಲೆ ಹಂಚಿಕೆಯ ಬಗ್ಗೆ ಮಂಡಳಿಯ ಮಾರ್ಗಸೂಚಿಗಳನ್ನು ಅನುಸರಿಸಿ, ಅಂಕಗಳನ್ನು ನೀಡಲಾಗುವುದು ಹಾಗೂ ಜಿಲ್ಲಾ ಮಟ್ಟದ ಏಕ ಗವಾಕ್ಷಿ ಹಂಚಿಕೆ ಸಮಿತಿಯು ಮಂಡಳಿಯಿಂದ ನಿಗದಿಪಡಿಸಲ್ಪಟ್ಟಿರುವ ಮಾನದಂಡಗಳ ಆಧಾರದ ಮೇಲೆ ಹಂಚಿಕೆಯನ್ನು ಪರಿಗಣಿಸಲಾಗುವುದು. ಬೆಂಗಳೂರು ನಗರ / ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳ ಪ್ರಕರಣಗಳಲ್ಲಿ ರಾಜ್ಯ ಮಟ್ಟದ ಮಳಿಗೆ ಹಂಚಿಕೆ ಸಮಿತಿಯಿಂದ ಹಂಚಿಕೆ ಮಾಡಲಾಗುವುದು.
5. ನಿವೇಶನ/ ಮಳಿಗೆ ಲಭ್ಯತೆ, ಮೀಸಲಾತಿ ಮುಂತಾದ ಪ್ರಮುಖ ಅಂಶಗಳನ್ನು ಪರಿಗಣಿಸಿ, ಹೆಚ್ಚಿನ ಅಂಕ ಪಡೆದ ಅರ್ಜಿದಾರರುಗಳಿಗೆ ಹಂಚಿಕೆಗೆ ಶಿಫಾರಸ್ಸು ಮಾಡಲಾಗುವುದು.
6. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಪ್ರಸ್ತುತ ಜಾರಿಯಲ್ಲಿರುವ ಮಳಿಗೆ/ನಿವೇಶನಗಳ ಹಂಚಿಕೆ ನಿಯಮಾವಳಿಗಳನ್ವಯ, ಇನ್ನು ಮುಂದೆ ನಿಗಮದ ವಿವಿಧ ಕೈಗಾರಿಕಾ ವಸಾಹತುಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಉದ್ದಿಮೆದಾರರುಗಳಿಗೆ ಹಂಚಿಕೆ ಮೀಸಲಾತಿಯಂತೆ ಮೀಸಲಿಟ್ಟಿರುವ ಖಾಲಿ ಮಳಿಗೆ / ನಿವೇಶನಗಳ ಹಂಚಿಕೆ ಅವಧಿಯನ್ನು ೦೩ ವರ್ಷಗಳ ಅವಧಿಗೆ ಮೀಸಲಿಡಲಾಗುವುದು.
7. ಯಾವುದಾದರೂ ಒಂದು ನಿವೇಶನ ಅಥವಾ ಒಂದು ಮಳಿಗೆ ಹಂಚಿಕೆಗೆ 6 ಅಥವಾ 6ಕ್ಕಿಂತ ಹೆಚ್ಚು ಅರ್ಜಿಗಳು ಸ್ವೀಕೃತಗೊಂಡಲ್ಲಿ, ಹರಾಜು ಪ್ರಕ್ರಿಯೆ ಕೈಗೊಂಡು ಅರ್ಜಿದಾರರುಗಳಲ್ಲಿ ಹರಾಜಿನಲ್ಲಿ ಹೆಚ್ಚಿನ ಮೌಲ್ಯದ ಬಿಡ್ ಮಾಡಿದವರಿಗೆ ಹಂಚಿಕೆಗೆ ಪರಿಗಣಿಸಲಾಗುವುದು.
8. ಮೇಲಿನಂತೆ ಶಿಫಾರಸ್ಸುಗಳನ್ನು ಆಯಾ ಜಿಲ್ಲೆಯ, ಜಿಲ್ಲಾ ಮಟ್ಟದ ಏಕ ಗವಾಕ್ಷಿ ಹಂಚಿಕೆ ಸಮಿತಿ ಮುಂದೆ ಮಂಡಿಸಿ, ಸಮಿತಿಯ ಅನುಮೋದನೆ ಪಡೆದ ತದನಂತರಲ್ಲಿಯೇ ನಿಗಮದ ಹಂಚಿಕೆ ನಿಯಮಾವಳಿಗಳನ್ವಯ ಹಂಚಿಕೆ ಪತ್ರ ವಿತರಿಸಲಾಗುವುದು.

| | | |
|---|---|---|
| ಈ. | ಉದ್ಯಮಗಳನ್ನು ನಡೆಸಲು ನೀಡಲಾಗಿರುವ ಜಮೀನುಗಳಲ್ಲಿ ಈವರೆವಿಗೂ ಉದ್ಯಮಗಳನ್ನು ಸ್ಥಾಪಿಸದಿರುವ ಉದ್ಯಮಿಗಳ ಸಂಖ್ಯೆ ಎಷ್ಟು; ಇವರುಗಳ ಮೇಲೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಕೆ.ಎಸ್.ಎಸ್.ಐ.ಡಿ.ಸಿ. ನಿಗಮದಿಂದ ಹಂಚಿಕೆ ಮಾಡಿರುವ ನಿವೇಶನಗಳ ಪೈಕಿ 2246 ನಿವೇಶನಗಳ ಹಂಚಿಕೆದಾರರು ತಮ್ಮ ಉದ್ದೇಶಿತ ಉದ್ಯಮಗಳನ್ನು ಸ್ಥಾಪಿಸಿರುವುದಿಲ್ಲ.<br>ಇಂತಹ ಉದ್ದಿಮೆದಾರರಿಗೆ ಮಳಿಗೆ/ ನಿವೇಶನಗಳ ಹಂಚಿಕೆ ನಿಯಮಾವಳಿಗಳ ಹಾಗೂ ಕೆ.ಪಿ.ಪಿ. ಕಾಯ್ದೆ-1974ರ ಪ್ರಕಾರ ಸಂಬಂಧಪಟ್ಟ ಉದ್ದಿಮೆದಾರರಿಗೆ ನೋಟೀಸ್‌ಗಳನ್ನು ಜಾರಿ ಮಾಡಲಾಗಿದೆ. |
| ಉ. | ರಾಜ್ಯದಲ್ಲಿ ಉದ್ಯಮಗಳನ್ನು ಸ್ಥಾಪಿಸದೆ ಅನ್ಯ ಉದ್ದೇಶಕ್ಕಾಗಿ ಜಮೀನನ್ನು ಬಳಸಿಕೊಂಡಿರುವ ಪ್ರಕರಣಗಳೆಷ್ಟು; ಹಾಗಿದ್ದಲ್ಲಿ, ಅಂತಹವರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕೆ.ಎಸ್.ಎಸ್.ಐ.ಡಿ.ಸಿ. ನಿಗಮದಿಂದ ಹಂಚಿಕೆ ಮಾಡಿರುವ ಒಟ್ಟು 192 ಉದ್ದಿಮೆದಾರರು ಅನ್ಯ ಉದ್ದೇಶಕ್ಕಾಗಿ ಬಳಸಿಕೊಂಡಿರುವ ಪ್ರಕರಣಗಳಾಗಿದ್ದು, ಇಂತಹ ಉದ್ದಿಮೆದಾರರಿಗೆ ಮಳಿಗೆ/ ನಿವೇಶನಗಳ ಹಂಚಿಕೆ ನಿಯಮಾವಳಿಗಳ ಹಾಗೂ ಕೆ.ಪಿ.ಪಿ. ಕಾಯ್ದೆ-1974ರ ಪ್ರಕಾರ ನೋಟೀಸ್‌ಗಳನ್ನು ಜಾರಿ ಮಾಡಲಾಗಿದೆ. |

**ಸಂಖ್ಯೆ: ಸಿಐ 26 ಐಎಪಿ(ಇ) 2020**

**(ಜಗದೀಶ್ ಶೆಟ್ಟರ್)**
**ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ,**
**ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು**